# ಅ. ನ. ಕೃ. ಗ್ರಂಥಸೂಚಿ

[೧೯೨೮ರಿಂದ ೧೯೬೦ರ ವರೆಗೆ]

ಸಿದ್ಧಪಡಿಸಿದವರು:

ಶ್ರೀ ದೇವದಾಸ ಬ್ಯಾಡಗಿ

ಮತ್ತು

ಶ್ರೀ ಶ್ರೀನಿವಾಸ ಹಾವನೂರ

[ಕರ್ನಾಟಕ ವಿಶ್ವವಿದ್ಯಾಲಯ ಗ್ರಂಥಾಲಯ, ಧಾರವಾಡ]

ಪ್ರಕಟಣೆ

೨೭ನೇ ಡಿಸೆಂಬರ ೧೯೬೦

ಸ್ವಾಗತ ಸಮಿತಿ, ೪೨ನೇ ಸಾಹಿತ್ಯ ಸಮ್ಮೇಲನ

ಮಣಿಪಾಲ, ದ. ಕ.

# ನಿವೇದನೆ

೪೨ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಮಣಿಪಾಲ (ಉಡುಪಿ) ಅಧಿವೇಶನದ ಅಧ್ಯಕ್ಷರಾದ ಶ್ರೀ ಅರಕಲಗೂಡು ನ. ಕೃಷ್ಣರಾಯರು ೧೯೨೪ರಿಂದ ೧೯೬೦ರ ವರೆಗಿನ ಅವಧಿಯಲ್ಲಿ ರಚಿಸಿದ ಗ್ರಂಥಗಳ ಸೂಚಿಯನ್ನು ಸಾದರಪಡಿಸುತ್ತಿದ್ದೇವೆ.

ಅವರ ಎಲ್ಲ ಕೃತಿಗಳನ್ನು ಈ ಕೆಳಗಿನ ಸಾಹಿತ್ಯ ವಿಭಾಗಗಳಲ್ಲಿ ಒಂದುಗೂಡಿಸಲಾಗಿದೆ.

೧. ಕಾದಂಬರಿ ೨. ಸಣ್ಣಕತೆ ೩. ನಾಟಕ
೪. ಪ್ರಬಂಧ, ವಿಮರ್ಶೆ ೫. ಜೀವನ ಚರಿತ್ರೆ
೬ ಸಂಪಾದಿತ ಕೃತಿಗಳು ೭. ಅನುವಾದಿತ ಗ್ರಂಥಗಳು

ಪರಿಶಿಷ್ಟವಾಗಿ ಅ. ನ. ಕೃ. ಬಗ್ಗೆ ಬರೆದ ಗ್ರಂಥಗಳನ್ನೂ ಕೂಡ ಲಾಗಿದೆ.

ಒಟ್ಟು ಇಲ್ಲಿ ಕೊಡಲಾದ ಅವರ ಕೃತಿಗಳ ಸಂಖ್ಯೆ ೧೨೬ರಲ್ಲಿ ೬೪ ಕಾದಂಬರಿಗಳಿವೆ. ಅವರು ಬರೆದ ಪುಟ ಸುಮಾರು ೨೨,೫೦೦ರಷ್ಟಾಗುತ್ತದೆ.

ಈ ಗ್ರಂಥ ಸೂಚಿಯನ್ನು ಸಿದ್ಧಪಡಿಸುವಾಗ ನಾವು ಕೆಲಸ ಮಾಡುತ್ತಿರುವ ಕರ್ನಾಟಕ ವಿಶ್ವವಿದ್ಯಾಲಯದ ಲೈಬ್ರರಿಯ, ಅಲ್ಲದೆ ಕರ್ನಾಟಕ ಸಾಹಿತ್ಯ ಮಂದಿರದವರ ನೆರವನ್ನು ಧಾರಾಳವಾಗಿ ಪಡೆದಿದ್ದೇವೆ.

ಸಮ್ಮೇಳನದ ಸ್ವಾಗತಸಮಿತಿಯವರು ಇದನ್ನು ಪ್ರಕಟಿಸುತ್ತಿದ್ದಾರೆ. ಮುಂದಣ ಸಮ್ಮೇಳನಗಳ ಸ್ವಾಗತಸಮಿತಿಯವರು ಆ ಆ ಅಧ್ಯಕ್ಷರ ಸಾಹಿತ್ಯ ಪರಿಚಯವನ್ನು ಈ ರೀತಿಯಲ್ಲಿ ಮಾಡಿಕೊಡಬೇಕೆನ್ನುವ ಸತ್‌ಪರಂಪರೆಗೆ ನಾಂದಿ ಹಾಕಿದ್ದಾರೆ.

ಧಾರವಾಡ,
ಡಿಸೆಂಬರ ೧೯೬೦

ದೇವಿದಾಸ ಬ್ಯಾಡಗಿ
ಶ್ರೀನಿವಾಸ ಹಾವನೂರ

# ೧ ಕಾದಂಬರಿಗಳು

**ಅಗ್ರತಾಂಬೂಲ**

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೭, ೨೭೧, ೨-೦೦

-ಸೇವೆಯ ಹೆಸರಿನಲ್ಲಿ ನಡೆಯುವ ಅನ್ಯಾಯಗಳನ್ನು ವಿವರಿಸುವ ಕಾದಂಬರಿ.

**ಅಪರಾಜಿತೆ**

ಮೈಸೂರು, ವಿದ್ಯಾನಿಧಿ, ೧೯೫೯, ೨೩೦, ೨-೦೦

-ಹಟಕ್ಕೆ ಬಿದ್ದ ಹೆಣ್ಣು ಅಪರಾಜಿತೆ-ಯಾದ ವಿಶಿಷ್ಟ ಮನೋಭಾವವನ್ನು ಇಲ್ಲಿ ಕಾಣಬಹುದು.

**ಅಭಿಮಾನ**

ಬೆಂಗಳೂರು, ಜಿ. ಕೆ. ಬ್ರದರ್ಸ್, ೧೯೬೦, ೧೮೨, ೨-೦೦

-ನಾಟಕ ಕಂಪೆನಿಗಳ ಏಳುಬೀಳುಗಳು ಹೊನ್ನು-ಹೆಣ್ಣುಗಳನ್ನು ಅವಲಂಬಿಸಿರುವ ಸೂಚನೆ ಇಲ್ಲಿದೆ.

**ಅಮರ ಆಗಸ್ಟ**

ಬೆಂಗಳೂರು, ಆನಂದ ಬ್ರದರ್ಸ್, ೧೯೫೦, ೧೪೧, ೨-೦೦

-೧೯೪೨ರ ಚಳುವಳಿಯು ಒಂದು ಹಳ್ಳಿಯಲ್ಲಿ ಬೆಳೆದು ಬಂದ ಬಗೆಯನ್ನು ಚಿತ್ರಿಸಲಾಗಿದೆ.

---

ಪುಸ್ತಕದ ಹೆಸರಿನ ಎದುರಿಗೆ ಕಂಸಿನಲ್ಲಿ ವರ್ಷವಿದ್ದುದಾದರೆ ಅದು ಮೊದಲ ಪ್ರಕಟಣೆಯ ವರ್ಷವನ್ನು ಸೂಚಿಸುತ್ತದೆ.

**ಅರಳು ಮರಳು** (೧೯೫೧)

ಬೆಂಗಳೂರು, ಅಶೋಕ, ೧೯೫೬, ೨೮೯, ೧-೫೦

-ಧರ್ಮದ ಹೆಸರಿನಲ್ಲಿ ಜನತೆಯ ಅಜ್ಞಾನಕ್ಕೆ ಪುಟಗೊಟ್ಟು ಅವರನ್ನು ಸುಲಿಯುವ ಸಮಾಜವಂಚಕರ ರೀತಿ-ನೀತಿ ಇಲ್ಲಿ ವರ್ಣಿತವಾಗಿದೆ.

**ಆಶೀರ್ವಾದ, ಅನುಗ್ರಹ**

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೫, ೫೨೮, ೩-೦೦

-ನೀತಿ-ಮೌಲ್ಯಗಳ ನಿರೂಪಣೆ ಈ ಕೃತಿಯ ಉದ್ದೇಶ. 'ಅನುಗ್ರಹವು' ಆಶೀರ್ವಾದದ ಮುಂದಿನ ಭಾಗ.

**ಈಚಲು ಮರದಮ್ಮ**

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೬, ೨೭೧, ೧-೫೦

-ಅಪೇಯ ಪಾನವು ಒಂದು ಕುಟುಂಬವನ್ನು ಹಾಳುಗೆಡವಿದ ಕಥೆಯಿದು.

**ಈ ದಾರಿ ಆ ದಾರಿ**

ಬೆಂಗಳೂರು, ಶಾರದಾ, ೧೯೬೦, ೧೭೨, ೧-೮೦

-ರಾಜಕೀಯ ಧುರೀಣರಿಂದ ಸಾಮಾಜಿಕ ಜೀವನದ ಮೇಲೆ ಆಗುವ ಪರಿಣಾಮ ಚಿತ್ರಣ.

**ಉದಯರಾಗ** (೧೯೩೪)

ಬೆಂಗಳೂರು, ಅಶೋಕ, ೧೯೫೫, ೧೫೭, ೧-೦೦

-ಓರ್ವ ಚಿತ್ರಗಾರನು ತನ್ನ ಗುರಿಯಿಂದ ಚ್ಯುತನಾಗಿ ಸ್ನೇಹಿತನ ಸಹಾಯದಿಂದ ಮಾರ್ಗವನ್ನು ಕಂಡುಕೊಂಡುದರ ಕಥೆ. ಅ. ನ. ಕೃ.ರ ಎರಡನೆಯ ಕಾದಂಬರಿ.

**ಕಟ್ಟಿದ ಬಣ್ಣ**

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೬, ೨೬೨, ೧-೫೦

-'ಸದ್ಯದ ಮೈಸೂರು ಸಂಗೀತದ ಪ್ರಪಂಚದ ಚಿತ್ರವೇ ನನ್ನ ಈ ಕಾದಂಬರಿಯ ವಸ್ತು.'

ಕಣ್ಣೀರು (೧೯೪೭)

ಬೆಂಗಳೂರು, ಅಶೋಕ, ೧೯೫೮, ೧೫೬, ೧-೨೫

-ವರದಕ್ಷಿಣೆಯ ಅವಾಸ್ತವ ಬೇಡಿಕೆಯಿಂದಾಗುವ ಅವಾಂತರ ಈ ಕಾದಂಬರಿಯಲ್ಲಿ ಬಂದಿದೆ.

ಕಂಕಣ ಬಲ

ಬೆಂಗಳೂರು, ಕಲಾಮಾಲಾ, ೧೯೫೮, ೨೦೪, ೧-೫೦

-ದಾಂಪತ್ಯ ವಿಚ್ಛೇದನದ ಆವಿದ್ಧ ಸನ್ನಿವೇಶಗಳ ಚಿತ್ರಣ.

ಕಾಮಿನಿ ಕಾಂಚನ, ಕಾಂಚನ ಗಂಗಾ

ಬೆಂಗಳೂರು, ಶಾರದಾ, ೧೯೫೫, ೫೨೧, ೩-೦೦

-ದುಡ್ಡಿನ ಹವ್ಯಾಸದ ವಿವಿಧ ಆವಿಷ್ಕಾರಗಳನ್ನೂ, ತತ್ಪರಿಣಾಮವಾಗಿ ಕಥಾನಾಯಕನ ಜೀವನದಲ್ಲಾದ ಏರು ಇಳಿವುಗಳನ್ನೂ ರೂಪಿಸುವ ಎರಡು ಕಾದಂಬರಿಗಳು.

ಕಾಲಚಕ್ರ (೧೯೫೧)

ಬೆಂಗಳೂರು, ಅಶೋಕ, ೧೯೫೬, ೨೩೧, ೧-೫೦

-ವ್ಯಕ್ತಿಗಳ ವಿಲೋಭನೆಯಿಂದಾಗಿ ಕುಟುಂಬದ ವ್ಯವಸ್ಥೆ ಕದಡಿದಾಗ ಅದು ಸಾಮಾಜಿಕ ಶೈಥಿಲ್ಯದ ಸಂಕೇತವಾಗುತ್ತದೆ ಎಂಬುದು ಈ ಕೃತಿಯ ನಿಲುವೆಯಾಗಿದೆ.

ಕಿತ್ತೂರು ರಾಣಿ ಚೆನ್ನಮ್ಮ

ಮೈಸೂರು, ಗೌರೀಶಂಕರ, ೧೯೫೪, ೧೪೫, ೧-೫೦

-ಕಥಾನಾಯಕಿ ಬ್ರಿಟಿಷ್ ಸತ್ತೆಯ ವಿರುದ್ಧ ಹೋರಾಡಿದ ಪ್ರಥಮ ಕನ್ನಡಿತಿ-.

ಕುಲಪುತ್ರ

ಬೆಂಗಳೂರು, ಪ್ರಸಾದ್, ೧೯೫೮, ೨೧೨, ೧-೮೦

-ಜಾತಿ-ಮತಗಳ ಕಲಹಕ್ಕೆ ಗುರಿಯಾದ ಹಳ್ಳಿಯು ಈ ಕೃತಿಯ ಹಿನ್ನೆಲೆಯಾಗಿದೆ.

**ಕುಂಕುಮ ಪ್ರಸಾದ**

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೮, ೧೯೪, ೧-೭೫

-ಗೃಹಜೀವನದ ಮಹತ್ವವನ್ನು ಬಿಂಬಿಸುವ ಕೌಟುಂಬಿಕ ಕಥನ.

**ಗೃಹಲಕ್ಷ್ಮಿ, ರುಕ್ಮಿಣಿ, ತಾಯಿಮಕ್ಕಳು**

ಬೆಂಗಳೂರು, ವಾಹಿನಿ, ೧೯೫೩-೫೫, ೮೩೭, ೪-೫೦

-ಸಾಮಾನ್ಯರ ಜೀವನದಲ್ಲಿ ಸುಪ್ತವಾಗಿರುವ ದೈವಿಕ ಚೇತನದ ಚಿತ್ರಣ. ಅಂಥ ದೈವಿಕ ಕಳೆಯಿಂದ ಕೂಡಿ, ಆದರ್ಶ ಗೃಹಿಣಿಯಾಗಿ ಬಾಳಿದ ರುಕ್ಮಿಣಿಯ ಚೇತನವು ಆವಳ ಮಕ್ಕಳಲ್ಲಿ ಆವಿರ್ಭಾವವನ್ನು ಹೊಂದಿದ ಬಗೆಯನ್ನು ಕೊನೆಯಲ್ಲಿ ಕಾಣಬಹುದು.

**ಗೌರಿ**

ಬೆಂಗಳೂರು, ಜಿ. ಕೆ. ಬ್ರದರ್ಸ್, ೧೯೫೮, ೨೩೫, ೧-೭೫

-'ಸಮಾಜದ ಬೇರೆಬೇರೆ ಅಂತಸ್ತುಗಳಿಗೆ ಸೇರಿದ ಕುಟುಂಬಗಳ ಜೀವನ ಚಿತ್ರಣವೇ ಗೌರಿ ಕಾದಂಬರಿಯ ವಸ್ತು.'

**ಚಿತ್ರವಿಚಿತ್ರ** (೧೯೫೨)

ಮೈಸೂರು, ವಿದ್ಯಾನಿಧಿ, ೧೯೫೮, ೨೯೯: ೨-೫೦

-ಚಲನಚಿತ್ರ ಪ್ರಪಂಚದ ಆಗುಹೋಗುಗಳ ವಾಸ್ತವ್ಯ ದರ್ಶನ.

**ಜಾತಕ ಪಕ್ಷಿ**

ಬೆಂಗಳೂರು, ಅಶೋಕ, ೧೯೫೬, ೨೧೦, ೧-೫೦

-ಮಿಶ್ರವಿವಾಹದ ಕ್ಲಿಷ್ಟ ಪ್ರಶ್ನೆಯನ್ನು ಎತ್ತಿಕೊಂಡು ರಚಿತವಾದ ಕಾದಂಬರಿ.

**ಜೀವನದಿ** (೧೯೫೩)

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೬, ೩೨೬, ೧-೫೦

-ಅತ್ತಿಗೆಯ ವಿಷಯದಲ್ಲಿ ಸಲ್ಲದ ಅಪವಾದಕ್ಕೆ ಗುರಿಯಾಗಿ ವಿರಕ್ತನಾಗಿ ಅಲೆದಾಡಿದವನ ಕಥೆ.

**ಜೀವನಯಾತ್ರೆ** (೧೯೩೪)

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೬, ೧೩೧, ೧-೨೫

-ದೇವದಾಸಿ ಸಮಸ್ಯೆಯನ್ನು ಹಿನ್ನೆಲೆಯಾಗಿಟ್ಟುಕೊಂಡು ರಚಿತವಾದ ಕಾದಂಬರಿ. ಸಮಸ್ಯೆಯ ಹಿನ್ನೆಲೆಯನ್ನು ಕೊಡುವ ಸುದೀರ್ಘ ಹಿನ್ನುಡಿಯನ್ನೊಳಗೊಂಡಿದೆ. ಅ. ನ. ಕೃ. ರ ಮೊದಲ ಕಾದಂಬರಿ.

**ತಾಯಿಯ ಕರುಳು** (೧೯೫೦)

ಮೈಸೂರು, ಡಿ. ವಿ. ಕೆ., ೧೯೫೭, ೧೩೩, ೧-೭೫

-ಮಕ್ಕಳ ಏಳ್ಗೆಗಾಗಿ ಸದಾ ಹಂಬಲಿಸುವ ತಾಯಿಯ ಹೃದಯದ ವಿವಿಧ ಬಗೆಯ ತೊಳಲಾಟದ ನಿರೂಪಣೆ.

**ಧರ್ಮಪತ್ನಿ**

ಗಾಯತ್ರಿ, ೧೯೬೦, ೧೭೫, ೧-೮೦

-ನಿಷ್ಪಾಪ ಜೀವಿಗಳಾದ ಓರ್ವ ತಾಯಿ, ಅವಳ ಮಗಳ ಕರುಣ ಕಥೆ.

**ನಗ್ನಸತ್ಯ, ಶನಿಸಂತಾನ, ಸಂಜೆಗತ್ತಲು, ಅಪರಂಜಿ; ಕಳಂಕಿನಿ, ಕಬ್ಬಿಣದ ಕಾಗೆ**

ಮೈಸೂರು, ಪ್ರಸಾದ್, ೧೯೫೮-೫೯, ೧೪೯೬, ೧೧-೭೫
ತಿಪಟೂರು, ಸುದರ್ಶನ, ೧೯೬೦, ೨೫೪, ೨-೫೦
(ಕೊನೆಯದರ ಪ್ರಕಾಶನ)

-ವೇಶ್ಯಾ ಸಮಸ್ಯೆಯ ವಿಶಾಲವಾದ ಹಿನ್ನೆಲೆಯನ್ನಿಟ್ಟುಕೊಂಡು, ೧೯೫೦ರಿಂದ ೧೦ ವರ್ಷಗಳ ವರೆಗಿನ ಅವಧಿಯಲ್ಲಿ ರಚಿತವಾದ ೬ ಕಾದಂಬರಿಗಳು.

**ನಟಸಾರ್ವಭೌಮ** (೧೯೪೪)

ಮೈಸೂರು, ಡಿ. ವಿ. ಕೆ.. ೧೯೫೫, ೯೮೬, ೪-೫೦

-ಅಭಿಜಾತ ನಟನೋರ್ವನ ಜೀವನದಲ್ಲಿ ಬರುವ ವಿವಿಧ ಸೋಲು ಗೆಲುವುಗಳ ಹಿನ್ನೆಲೆಯಲ್ಲಿ, ಅವನ ಧ್ಯೇಯ ಸಾಧನೆಯನ್ನು ವಿವರಿಸಿದ್ದಾಗಿದೆ.

**ಪಶ್ಚಾತ್ತಾಪ, ಪುನರಾವತಾರ**

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೫-೫೬, ४೯೫, ३-೦೦

-ಹರಿಜನ ಸಮಸ್ಯೆಯ ಬುನಾದಿ, ಪರಂಪರಾಗತ ಭಾವನೆ, ಕಥಾ ನಾಯಕನಾದ ಚೆನ್ನನು ಈ ಸಮಸ್ಯೆಯನ್ನು ಎದುರಿಸಿದ ಬಗೆ ಇವುಗಳನ್ನು ಈ ಕೃತಿಗಳಲ್ಲಿ ಕಾಣಬಹುದು.

**ಪಂಜರದ ಗಿಳಿ** (೧೯೫४)

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೬, ೧೬೬, ೧-೫೦

-ಸ್ತ್ರೀ ಸ್ವಾತಂತ್ರ್ಯದ ಪ್ರಶ್ನೆಯ ಪೂರ್ವೋತ್ತರ ವಾದಗಳನ್ನು ಮಂಡಿಸುವ ಕಾದಂಬರಿ.

**ಪಾಪಿಯ ನೆಲೆ**

ಬೆಂಗಳೂರು, ಅಶೋಕ, ೧೯೫೬, ೨३४, ೧-೫೦

-ಪಾಪಿಗಳನ್ನು ಸನ್ಮಾರ್ಗಕ್ಕೆ ತಿರುಗಿಸಲು ಸಾಧ್ಯವೇ? ಎಂದು ಮುಂತಾದ ಪ್ರಶ್ನೆಗಳನ್ನು ಓದುಗರಲ್ಲಿ ಮೂಡಿಸುವ ಕೃತಿ.

**ಬಣ್ಣದ ಬದುಕು** (೧೯೫३)

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೬, ೨೨३, ೧-೫೦

-ಅಲ್ಪಕ್ಕೆ ಆಸೆಪಟ್ಟು ನಾಟ್ಯಕಲೆಯ ಭವ್ಯದರ್ಶನದಿಂದ ವಿಮುಖನಾದ ಕೀರ್ತಿ; ಅದೇ ದರ್ಶನಕ್ಕಾಗಿ ಸರ್ವಸ್ವವನ್ನು ತ್ಯಾಗ ಮಾಡಿದ ಕಲ್ಪನಾ-ಈ ವ್ಯಕ್ತಿಗಳ ಬದುಕಿನ ಚಿತ್ರಣ ಇಲ್ಲಿದೆ.

**ಭೂಮಿತಾಯಿ**

ಬೆಂಗಳೂರು, ಜಿ. ಕೆ. ಬ್ರದರ್ಸ್, ೧೯೫೮, ೨೧४, ೧-೫೦

-ನಮ್ಮ ದೇಶ ಮುಂದೆ ಬರಬೇಕಾದರೆ, ಹಳ್ಳಿಗಳು ಸುಧಾರಿಸದೇ ಅನ್ಯ ಗತಿಯಿಲ್ಲವೆಂಬ ಭಾವನೆಯನ್ನು ಮೂಡಿಸುವ ಕಾದಂಬರಿ.

ಮರಳು ಮನೆ, ಕೀರ್ತಿಕಳಸ

ಮೈಸೂರು, ವಿದ್ಯಾನಿಧಿ, ೧೯೫೯, ೫೭೨, ೪-೭೫

-ಇಂದಿನ ರಾಜಕೀಯ, ಸಾಮಾಜಿಕ ಸನ್ನಿವೇಶಗಳಲ್ಲಿ ಸತ್ಯ ಜೀವನವನ್ನು ನಡೆಸುವುದರಿಂದ ಒದಗುವ ಸಂಕಷ್ಟಗಳ ಬಣ್ಣನೆ ಇದೆ.

ಮಂಗಳಸೂತ್ರ (೧೯೪೦)

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೫, ೨೨೧, ೨-೦೦

-ಹೊಸದು, ಹಳೆಯದರ ಸ್ಪಷ್ಟ ತಿಳುವಳಿಕೆ, ಅವುಗಳನ್ನು ನಮ್ಮ ಇಂದಿನ ಜೀವನದ ಪ್ರಗತಿಗೆ ಹೊಂದಿಕೊಳ್ಳುವ ಅಗತ್ಯವನ್ನು ಬಿಂಬಿಸುವ ಕರುಣಾಮಯ ಕಥನ.

ಮುಡಿಮಲ್ಲಿಗೆ

ಬೆಂಗಳೂರು, ಜಿ. ಕೆ. ಬ್ರದರ್ಸ್, ೧೯೫೯, ೧೯೧, ೨-೦೦

-ಹಿರಿಯರು ಕಿರಿಯರನ್ನು ಹಿತವಾಗಿ ಕಾಣಬೇಕೆಂಬ ಸೂಚನೆಯುಳ್ಳ ಕೌಟುಂಬಿಕ ಕಾದಂಬರಿ.

ಮುಯ್ಯಿಗೆ ಮುಯ್ಯಿ (೧೯೫೦)

ಬೆಂಗಳೂರು, ವಸಂತ, ೧೯೫೪, ೨೦೬, ೧-೦೦

-ವಾಮಾಚಾರವನ್ನು ಕುರಿತ ಕಾದಂಬರಿ. ಅದರಿಂದ ಪ್ರಜಾಪೀಡನೆ, ಲೋಕಕಲ್ಯಾಣ ಇವೆರಡೂ ಸಾಧ್ಯವೆಂಬ ಅಂಶವನ್ನೊಳಗೊಂಡಿದೆ.

ರಣವಿಕ್ರಮ

ಬೆಂಗಳೂರು, ಶಾರದಾ, ೧೯೫೯, ೨೦೧, ೧-೭೫

-ಮೊಘಲ್ ಸಾಮ್ರಾಜ್ಯಶಾಹಿಯ ವಿರುದ್ಧ ಹೋರಾಡಿದ ಅಪ್ರತಿಮ ವೀರ ರಾಣಾ ಪ್ರತಾಪಸಿಂಹನ ಕಥೆ ಇದು.

ರೂಪಶ್ರೀ

ಬೆಂಗಳೂರು, ಸುದರ್ಶನ, ೧೯೬೦, ೧೯೯, ೨-೦೦

-ಸತ್ಯ, ಪ್ರೇಮ, ತ್ಯಾಗ-ಸ್ತ್ರೀಯ ಈ ಮೂರು ಗುಣಗಳು ಈ ಕಾದಂಬರಿಯ ಮೂರು ಪಾತ್ರಗಳಲ್ಲಿ ನೆಲೆಗೊಂಡಿವೆ.

## ವಿಜಯ ವಿದ್ಯಾರಣ್ಯ, ತಪೋಬಲ, ಪುಣ್ಯಪ್ರಭಾವ, ಪ್ರೌಢಪ್ರತಾಪಿ, ಮೋಹನಮುರಾರಿ, ಯಶೋದುಂದುಭಿ, ಅಭಯಪ್ರದಾನ

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೮-೬೦, ೧೧೭೪, ೧೩-೨೫

-ಶ್ರೀ ವಿದ್ಯಾರಣ್ಯರಿಂದ ಆರಂಭವಾದ ವಿಜಯನಗರ ಸಾಮ್ರಾಜ್ಯದ ಸಮಗ್ರ ಚಿತ್ರವನ್ನು ಕೂಡ ತಿಳಿಸಿರುವ ಕಾದಂಬರಿಗಳ ಮಾಲಿಕೆಯಲ್ಲಿ, ಕೃಷ್ಣದೇವರಾಯನ ಉತ್ತರಾರ್ಧ ಜೀವನದ, ವೈಭವದ ವರೆಗೆ ಕಥೆ ಹರಿದು ಬಂದಿದೆ.

## ಶ್ರೀಮತಿ

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೮, ೩೬೪, ೨-೫೦

-ಪಾಶ್ಚಾತ್ಯ ಪೌರ್ವಾತ್ಯ ವಿಚಾರಗಳ ಘರ್ಷಣೆಯಲ್ಲಿ ಮೂರು ದಂಪತಿಗಳು ಎದುರಿಸಿದ ಸಮಸ್ಯೆಗಳ ನಿರೂಪಣೆ.

## ಸಂಗ್ರಾಮ

ಧಾರವಾಡ, ಪ್ರತಿಭಾ, ೧೯೫೩, ೨೫೯, ೩-೦೦

-ಭಾರತೀಯ ಸಂಪ್ರದಾಯದಲ್ಲಿ ಬೆಳೆದು ಬಂದ ಶಿಲ್ಪಿಯು ಹೆಣ್ಣಿನ ಲೋಭಕ್ಕೆ ಒಳಗಾಗಿ ಅಧೋಗತಿಗೆ ಇಳಿದುದೂ, ಅಲ್ಲಿಂದ ಮರಳಿ ತನ್ನ ಜಾಡನ್ನು ಕಂಡುಕೊಂಡುದುದೂ ವರ್ಣಿತವಾಗಿದೆ.

## ಸಂಧ್ಯಾರಾಗ (೧೯೩೮)

ಮೈಸೂರು, ಪ್ರಸಾದ್, ೧೯೫೫, ೩೧೫, ೧-೫೦

-ದೈವದತ್ತ ಕಲೆಯ ಆವಿಷ್ಕಾರದಲ್ಲಿ ತನ್ನ ದೇಹ, ಜೀವಗಳನ್ನು ಸವೆಸಿದ ಸಂಗೀತಗಾರನ ದುರಂತ ಚಿತ್ರಣ. ಸಾರ್ವತ್ರಿಕ ಮೆಚ್ಚಿಗೆಯನ್ನು ಪಡೆದ ಕೃತಿ. ಹಿನ್ನುಡಿಯಾಗಿ 'ಸಂಧ್ಯಾರಾಗ ಪ್ರಶಸ್ತಿ' ಯನ್ನು ಒಳಗೊಂಡಿದೆ.

## ಸಾಹಿತ್ಯರತ್ನ (೧೯೫೩), ಗಾಜಿನ ಮನೆ, ಕನ್ನಡಮ್ಮನ ಗುಡಿಯಲ್ಲಿ, ದೀಪಾರಾಧನೆ

ಬೆಂಗಳೂರು, ಅಶೋಕ, ೧೯೫೪-೫೫, ೧೦೬೪, ೬-೦೦

-'ಈ ನಾಲ್ಕು ಕಾದಂಬರಿಗಳಿಂದ ನಮ್ಮ ನಾಡವರಿಗೆ ನಮ್ಮ ನಾಡಿನ ಸಾಹಿತ್ಯ, ಪತ್ರಿಕೋದ್ಯಮಗಳ ಪೂರ್ವ ಹಾಗೂ ವರ್ತಮಾನ ಸ್ಥಿತಿಯ ಅರಿವು ಸ್ವಲ್ಪವಾದರೂ ಆದರೆ ನನ್ನ ಪ್ರಯತ್ನ ಸಾರ್ಥಕ'

## ಸ್ತ್ರೀಮುಖವ್ಯಾಘ್ರ

ಬೆಂಗಳೂರು, ಗೀತಾ, ೧೯೬೦, ೨೨೩, ೨-೦೦

-ಋಜು ಮಾರ್ಗದಲ್ಲಿ ನಡೆದ ಹೆಣ್ಣು ತನ್ನ ಮತ್ತು ರಾಷ್ಟ್ರದ ಅಭ್ಯುದಯವನ್ನು ಸಾಧಿಸಬಲ್ಲಳು. ಆದೇ, ಆಶೆ-ಆಮಿಷಗಳಿಗೆ ಬಲಿಯಾದವಳು ತನ್ನ ಮತ್ತು ಸುತ್ತಲಿನ ಸಮಾಜವನ್ನು ಹದಗೆಡಿಸುವಳು. ಇದು ಈ ಕೃತಿಯ ಸೂತ್ರ.

## ಹೃದಯ ಸಾಮ್ರಾಜ್ಯ

ಬೆಂಗಳೂರು, ಸ್ಟ್ಯಾಂಡರ್ಡ್, ೧೯೬೦, ೧೬೩, ೨-೦೦

-'ಜೀವನದ ಕಹಿ-ಸಿಹಿಯನ್ನು ಕಂಡುಂಡ ಸೀತಮ್ಮ, ಪಾತಕ್ಕ ತಮ್ಮ ಅಂತಸ್ಸತ್ವದಿಂದ ಅನೇಕರ ಜೀವನಕ್ಕೆ ಬೆಳಕು ನೀಡಿದ ಕಥೆ.'

## ಹುಲಿಯುಗುರು ಭಾಗ ೧-೩

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೭, ೬೦೯, ೫-೦೦

-ಲೋಕ ಜೀವನದ ಮೇರೆ ಮೀರಿ ಹೊರನಿಂತವರನ್ನು ಸಮಾಜ ದ್ರೋಹಿಗಳೆಂದು ದೂರ ತಾಕದೆ, ಅವರ ಹೃದಯದಲ್ಲಿ ಋಜು ಬಾಳ್ವೆಯ ಬೆಳಕನ್ನು ಬಿತ್ತಬೇಕೆನ್ನುವ ಸೂತ್ರ ಈ ಕಾದಂಬರಿತ್ರಯದಲ್ಲಿದೆ.

ಹೆಂಗರಳು

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೮, ೨೦೦, ೧-೭೫

-ಬಂಜೆಯೋರ್ವಳ ಸಂಜೆಗನಸಿನ ಹೊಸಲಿನಲ್ಲಿ ಹೆಂಗರುಳಿನಿಂದ ಕೂಡಿದ ವ್ಯಕ್ತಿಗಳುಳ್ಳ ಕೌಟುಂಬಿಕ ಕಥನ.

ಹೊಸಲು ದಾಟಿದ ಹೆಣ್ಣು (೧೯೪೬)

ಮೈಸೂರು, ಡಿ. ವಿ. ಕೆ., ೧೯೫೪, ೨೫೨, ೧-೫೦

-ಹೊಸಲನ್ನು ದಾಟ-ಹೊರಗಿನ ಕ್ಷೇತ್ರದಲ್ಲಿ ಕಾಲಿಟ್ಟ ಹೆಣ್ಣು, ಸ್ವಾರ್ಥಿಗಳಾದ ರಾಜಕೀಯ ವ್ಯಕ್ತಿಗಳ ಕೈಯಲ್ಲಿ ಸಿಕ್ಕಾಗ ಅಡ್ಡ ಹಾದಿ ಹಿಡಿಯುವುದು ಅನಿವಾರ್ಯವೆಂಬ ಧ್ವನಿ ಈ ಕೃತಿಯಲ್ಲಿದೆ.

[ಕಾದಂಬರಿಗಳು: ೬೮]

## ೨ ಸಣ್ಣ ಕತೆಗಳು

ಅಗ್ನಿಕನ್ಯೆ (೧೯೪೭)

ಬೆಂಗಳೂರು, ಆನಂದ ಬ್ರದರ್ಸ್, ೧೯೫೦, ೧೫೧, ೨-೦೦

ಕಣ್ಣಮುಚ್ಚಾಲೆ

ಧಾರವಾಡ, ಕ. ಸಾ. ಮ., ೧೯೪೫, ೯೬, ೧-೭೫

-೯ ಕತೆಗಳಿವೆ. 'ಜಾತಿ ಹೀನನ ಮನೆಯ ಜ್ಯೋತಿ' ಎಂಬ ವಿಶೇಷ ಕತೆಯೂ ಸೇರಿದೆ.

ಕಾಮನ ಸೋಲು (೧೯೪೭)

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೬, ೧೩೯, ೧-೦೦

-ಈ ಮೊದಲು ಪತ್ರಿಕೆಗಳಲ್ಲಿ ಪ್ರಕಟವಾದ ೧೨ ಸ್ವತಂತ್ರ ಕಥೆಗಳಿವೆ.

ಕಿಡಿ (೧೯೩೧)

ಬೆಂಗಳೂರು, ಆನಂದ ಬ್ರದರ್ಸ್, ೧೯೪೯, ೭೯, ೧-೨೫

-ಸಾಮಾಜಿಕ ಸಮಸ್ಯೆಗಳಿಂದ ಕೂಡಿದ ೬ ಕತೆಗಳಿವೆ.

ಪಾಪ-ಪುಣ್ಯ (೧೯೪೩)

ಬೆಂಗಳೂರು, ಎಸ್ಸೆಸ್ಸೆನ್, ೧೯೪೯, ೧೨೯, ೧-೫೦

-೧೨ ಸಣ್ಣ ಕತೆಗಳ ಕೊನೆಗೆ 'ಸಾಹಿತ್ಯದಲ್ಲಿ ಶೀಲ ಪ್ರಶ್ನೆ' ಎಂಬ ಅನುಬಂಧವಿದೆ.

ಮಿಂಚು (೧೯೩೦)

ಬೆಂಗಳೂರು, ಮಾಧವ, ೧೯೪೭, ೧೨೦, ೧-೫೦

-ಅ. ನ. ಕೃ.ರ ಪ್ರಥಮ ಕಥಾಸಂಕಲನ.

ಶಿಲ್ಪಿ

ಬೆಂಗಳೂರು, ಆನಂದ, ೧೯೪೯, ೯೫, ೧-೨೫

-ಸೌಂದರ್ಯದ ಗುರಿ, ಅಧ್ಯಾತ್ಮ, ತ್ಯಾಗದ ನೆಲೆ ಮುಂತಾದ ಪ್ರಶ್ನೆಗಳು ಇಲ್ಲಿಯ ೬ ಕತೆಗಳಲ್ಲಿ ತಲೆದೋರಿವೆ.

ಸಮರ ಸುಂದರಿ

ಬೆಂಗಳೂರು, ಗೀತ, ೧೯೬೦, ೧೨೦, ೧-೫೦

[ಸಣ್ಣ ಕತೆಗಳು: ೮]

## ೩ ನಾಟಕಗಳು

ಆದದ್ದೇನು

೧೯೩೧,

-ಕಲಹದಿಂದ ಬಡಿದಾಡುವ ಎರಡು ಸಂಸಾರಗಳು, ಒಬ್ಬನ ತ್ಯಾಗದಿಂದಾಗಿ ಒಂದಾಗುವ ಸಂದರ್ಭವಿಲ್ಲಿದೆ.

ಆಹುತಿ

೧೯೩೦

ಎರಡು ನಾಟಕಗಳು

ಧಾರವಾಡ, ಕ. ಸಾ. ಮ., ೧೯೩೮, ೮೭, ೦-೫೦

-ಸ್ವರ್ಣಮೂರ್ತಿ ಮತ್ತು ಹಿರಣ್ಯಕಶಿಪು, ಎಂಬ ಎರಡು ಪೌರಾಣಿಕ ನಾಟಕಗಳಿವೆ.

**ಕಿತ್ತೂರು ರಾಣಿ ಚೆನ್ನಮ್ಮ**

ಬೆಂಗಳೂರು, ಆನಂದ, ೧೯೫೧, ೩೭, ೦-೭೫

-ಅರ್ವಾಚೀನ ಭಾರತದ ಸ್ವಾತಂತ್ರ್ಯ ಸಮರದ ಪ್ರಥಮ ಹುತಾತ್ಮೆಯಾದ ಕಿತ್ತೂರಿನ ಈ ರಾಣಿಯನ್ನು ಕುರಿತು ರೇಡಿಯೋ ನಾಟಕ.

**ಗೋಮುಖ ವ್ಯಾಘ್ರ**

ಬೆಂಗಳೂರು, ವಿಶ್ವವಾಣಿ, ೧೯೩೬, ೨೪, ೦-೫೦

-'ಅನ್ಯೋನ್ಯವಲ್ಲದ ದಾಂಪತ್ಯವು ಹೇಗೆ ಅನ್ಯ-ಅನ್ಯರಲ್ಲಿ ಮುಕ್ತಾಯವಾಗುತ್ತದೆ ಎಂಬುದನ್ನು ತೋರಿಸುವುದೇ ಇದರ ಉದ್ದೇಶ.'

**ಜಗಜ್ಜ್ಯೋತಿ ಬಸವೇಶ್ವರ**

ಮೈಸೂರು, ಉಷಾ, ೧೯೪೯, ೧೪೪, ೨-೦೦

-ಸಕಲ ಜೀವಾತ್ಮರಿಗೆ ಲೇಸನ್ನೆ ಬಯಸಿದ ಬಸವಣ್ಣನವರ ಚಾರಿತ್ರಿಕ ನಾಟಕ.

**ಬಣ್ಣದ ಬೀಸಣಿಗೆ ಭಾಗ ೧** (೧೯೩೮)

ಮೈಸೂರು, ವಿದ್ಯಾನಿಧಿ, ೧೯೫೯, ೬೮, ೦-೮೦

-ಬಣ್ಣದ ಬೀಸಣಿಕೆ ಅಲ್ಲದೆ, ಜ್ವಾಲಾಮುಖಿ, ಅನುಗ್ರಹ ಈ ಮೂರು ಏಕಾಂಕಗಳ ಸಂಗ್ರಹ. ಸಿನೆಮಾ ಪ್ರಪಂಚ, ಹಿಂದೀ ಚಳುವಳಿ, ಆನೆಗುಂದಿಯ ಸಂಸ್ಥಾನ-ಈ ವಸ್ತುಗಳಿವೆ.

**ಬಣ್ಣದ ಬೀಸಣಿಗೆ ಭಾಗ ೨** (೧೯೩೮)

ಧಾರವಾಡ, ಪ್ರೇಮ, ೧೯೩೮, ೨೨೫, --

-೪ ಏಕಾಂಕಗಳ ಸಂಗ್ರಹ. 'ಜೀವದಾಸೆಯ ಸಮಸ್ಯೆ', 'ಧರ್ಮಸಂಕಟ' ಎಂಬಿವು ಏಕಾಂಕದಲ್ಲಿದೆ. 'ಪಾಲು' ನಾಟಕದಲ್ಲಿ ಗ್ರಾಮ್ಯಜೀವನವನ್ನೂ 'ಗುಬ್ಬಚ್ಚಿಯ ಗೂಡು'ವಿನಲ್ಲಿ ವಿಷಮ ವಿವಾಹಸಮಸ್ಯೆಯನ್ನೂ ಚಿತ್ರಿಸಲಾಯಿತು. 'ವಿಶ್ವಧರ್ಮ'ವು ಇನ್ನೊಂದು ಏಕಾಂಕವಾಗಿದೆ.

ಮದುವೆಯೋ ಮನೆಹಾಳೋ (೧೯೨೮)

ಬೆಂಗಳೂರು, ಆನಂದ, ೧೯೫೦, ೯೧, ೧-೫೦

-ಮೊದಲ ನಾಟಕ. ವೃದ್ಧನೊಬ್ಬ ವಿವಾಹದ ಹುಚ್ಚಿಗೊಳಗಾಗಿ ಓರ್ವ ನಿರಪರಾಧಿನಿಯನ್ನು ದುಃಖದಲ್ಲಿ ಮುಳುಗಿಸುವ ಸನ್ನಿವೇಶ ಇಲ್ಲಿದೆ.

ಮಾಗಡಿ ಕೆಂಪೇಗೌಡ

ಬೆಂಗಳೂರು, ಅಶೋಕ, ೧೯೫೫, ೧೦೩, ೦-೭೫

-ಬೆಂಗಳೂರಿನ ಸಂಸ್ಥಾಪಕ ಕೆಂಪೇಗೌಡನ ಜೀವನವಿದೆ. ಉಳಿದೆರಡು-ಸೂತಪುತ್ರ ಕರ್ಣ, ಶ್ರೀ ರಾಮ ಪಾದುಕಾಪಟ್ಟಾಭಿಷೇಕಗಳು ಹೊಸ ದೃಷ್ಟಿಯುಳ್ಳ ಪೌರಾಣಿಕ ರೇಡಿಯೋ ನಾಟಕಗಳು.

ರಜಪೂತ ಲಕ್ಷ್ಮೀ (೧೯೪೫)

ಬೆಂಗಳೂರು, ಆನಂದ, ೧೯೫೦, ೧೧೪, ೧-೭೫

-ಹಿಂದೂ ಮುಸ್ಲಿಂ ಐಕ್ಯವನ್ನು ಬಿಂಬಿಸುವ ಐತಿಹಾಸಿಕ ನಾಟಕ.

ಸ್ವರ್ಣಮೂರ್ತಿ

ಬೆಂಗಳೂರು, ಆನಂದ, ೧೯೫೦, ೪೩, ೦-೬೨

-ಪೌರಾಣಿಕ ಸೀತಾ ಪರಿತ್ಯಾಗವನ್ನು ಆಧುನಿಕ ದೃಷ್ಟಿಕೋನದಿಂದ ಇಲ್ಲಿ ಕಂಡದ್ದಿದೆ.

ಹಿರಣ್ಯಕಶಿಪು

ಬೆಂಗಳೂರು, ಆನಂದ, ೧೯೫೦, ೪೧, ೦-೭೫

-ಹಿರಣ್ಯಕಶಿಪುವಿನ ಸಾವನ್ನು ವಿಶಿಷ್ಟ ದೃಷ್ಟಿಕೋನದಿಂದ ವಿವರಿಸಿದ ನಾಟಕ.

[ನಾಟಕಗಳು: ೧೩]

# ೪ ಪ್ರಬಂಧ ವಿಮರ್ಶೆ

## ಅಖಂಡ ಕರ್ನಾಟಕ

ಬೆಂಗಳೂರು, ಪ್ರಗತಿಶೀಲ, ೧೯೪೬: ೯೦, ೧-೦೦

-ಕರ್ನಾಟಕಪ ಪ್ರಚಲಿತ ಸಮಸ್ಯೆಗಳ ವಿವೇಚನೆಯುನ್ನೊಳಗೊಂಡ ೨೪ ಲೇಖನಗಳ ಸಂಗ್ರಹ.

## ಕನ್ನಡದ ದಾರಿ

ಬೆಂಗಳೂರು, ಪ್ರಗತಿಶೀಲ: ೧೯೪೬, ೧೫೦, ೨-೦೦

-ಕರ್ನಾಟಕ ಶಿಕ್ಷಣ, ಕಲೆ, ಸಂಸ್ಕೃತಿಗಳಿಗೆ ಸಂಬಂಧಪಟ್ಟ ವಿಚಾರಗಳನ್ನೊಳಗೊಂಡಿದೆ.

## ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ

ಬೆಂಗಳೂರು, ಆನಂದ, ೧೯೫೦, ೧೩೦, ೧-೫೦

-ಕನ್ನಡ ಸಾಹಿತ್ಯ, ಕೈಲಾಸಂ, ಬಸವಣ್ಣ, ಸಂಸ್ಕೃತಿ-ಈ ವಿಷಯಗಳ ವಿವೇಚನೆ.

## ಕರ್ನಾಟಕದ ಹಿತಚಿಂತನೆ

ಬೆಂಗಳೂರು, ಎಸ್ಸೆಸ್ಸೆನ್, ೧೯೪೭, ೯೨, ೧-೦೦

-ಕನ್ನಡಿಗರ ಜೀವನಕ್ಕೆ ಸಂಬಂಧಿಸಿದ ೧೫ ಲೇಖನಗಳಿವೆ.

## ಪೊರಕೆ

ಬೆಂಗಳೂರು, ಪ್ರಗತಿಶೀಲ, ೧೯೪೬, ೮೦, ೧-೦೦

-ಹದಿನಾರು ಹರಟೆಗಳ ಸಂಗ್ರಹ.

## ಬಳ್ಳಾರಿಯ ಸಮಸ್ಯೆ ಮತ್ತು ಕರ್ನಾಟಕ ಪ್ರಾಂತ್ಯ

ಬೆಂಗಳೂರು, ಅರುಣೋದಯ, ೧೯೫೩, ೭೦, ೦-೫೦

-ಬಳ್ಳಾರಿಯು ಕರ್ನಾಟಕದಲ್ಲಿ ಸೇರಬೇಕೆನ್ನುವ ಅಂಶವನ್ನು ಎಲ್ಲ ದೃಷ್ಟಿಗಳಿಂದ ವಿವೇಚಿಸಲಾದ ಕೃತಿ.

**ಭಾರತೀಯ ಚಿತ್ರಕಲೆಯಲ್ಲಿ ರಾಜಾ ರವಿವರ್ಮನ ಸ್ಥಾನ**

ಬೆಂಗಳೂರು, ವಿ. ಜಿ. ಟಿ., ೧೯೩೨, ೧೨೫, —

-ಸುಪ್ರಸಿದ್ಧ ಕಲಾವಿದ ರವಿವರ್ಮನ ವ್ಯಕ್ತಿತ್ವ, ಕಲೆಗಳ ಸವಿವರ ವಿಮರ್ಶೆ. ಅವನ ೨೨ ಚಿತ್ರಗಳೂ ಇವೆ.

**ರಾಘವಾಂಕನ ಹರಿಶ್ಚಂದ್ರ ಕಾವ್ಯ**

ಬೆಂಗಳೂರು, ವೆಂಕಟೇಶ್ವರ, ೧೯೫೦, ೬೬, ೧-೧೨

-ಮೂಲತಃ 'ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ'ಯಲ್ಲಿ ಬಂದಿದ್ದ ಒಂದು ರಸವಿಮರ್ಶೆ.

**ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ** (೧೯೪೩)

ಬೆಂಗಳೂರು, ಎಸ್ಸೆಸ್ಸೆನ್, ೧೯೫೯, ೨೧೨, —

-ವೀರಶೈವ ವಾಙ್ಮಯದ ವ್ಯಾಪ್ತಿ, ಸಾಂಸ್ಕೃತಿಕ ಅಂಶಗಳು, ಕೆಲವು ವೀರಶೈವ ಕವಿಗಳ ಕೃತಿಗಳ ವಿಮರ್ಶೆಗಳನ್ನೊಳಗೊಂಡಿದೆ.

**ಸಜೀವ ಸಾಹಿತ್ಯ**

ಹುಬ್ಬಳ್ಳಿ, ಜಲಾ ಸಮ್ಮೇಳನ, ೧೯೪೬, ೩೭, —

-ಧಾರವಾಡ ಜಿಲ್ಲೆಯ ೬ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ.

**ಸಮದರ್ಶನ**

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೬, ೧೨೭, ೨-೫೦

-ಕಲೆ, ಧರ್ಮ, ಸಂಸ್ಕೃತಿಗಳ ಮೇಲಿನ ಲೇಖನಗಳೂ, ಹಲವು ವ್ಯಕ್ತಿಗಳ ಪರಿಚಯಗಳೂ ಇರುವ ೧೬ ಪ್ರಬಂಧಗಳ ಸಂಕಲನ.

**ಸಂಸ್ಕೃತಿಯ ವಿಶ್ವರೂಪ** (೧೯೫೫)

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೭, ೧೫೨, ೧-೫೦

-ಕನ್ನಡ ಸಾಹಿತ್ಯ, ರಂಗಭೂಮಿ, ಲಲಿತಕಲೆಗಳು, ಇವೇ ಮುಂತಾದ ವಿಷಯಗಳನ್ನೊಳಗೊಂಡ ೧೫ ಪ್ರಬಂಧಗಳಿವೆ.

## ಸಾಹಿತ್ಯ ಮತ್ತು ಕಾಮಪ್ರಚೋದನೆ (೧೯೫೨)

ತಿಪಟೂರು, ಸುದರ್ಶನ, ೧೯೬೦, ೨೭೨, ೨-೫೦

-'ನಗ್ನ ಸತ್ಯ, ಶನಿಸಂತಾನ' ಕಾದಂಬರಿಗಳು ಅಶ್ಲೀಲವಾಗಿವೆ ಯೆಂಬ ಟೀಕೆಗೆ ಗುರಿಯಾದಾಗ, ಅದಕ್ಕೆ ಉತ್ತರ ರೂಪವಾಗಿ ಹಿಂದು ಇಂದಿನ ಕನ್ನಡ ಸಾಹಿತ್ಯದಲ್ಲಿ ಕಾಮ ವಿಷಯ ಬಂದ ಬಗೆ, ವೇಶ್ಯಾ ಸಮಸ್ಯೆ, ವಿಮರ್ಶೆಯ ರೀತಿ-ನೀತಿ, ಇವುಗಳನ್ನು ಕುರಿತು ಬರೆದ ಸವಿವರವಾದ ಹಿರಿಯ ಪ್ರಬಂಧ.

## ಸಾಹಿತ್ಯ ಮತ್ತು ಜೀವನ

ಧಾರವಾಡ, ಕ. ಸಾ. ಮಾ., ೧೯೪೪, ೧೩೦, ೧-೫೦

-ಕನ್ನಡ ಸಾಹಿತ್ಯಕ್ಕೆ ವಿಶೇಷವಾಗಿ ಸಂಬಂಧಪಟ್ಟ ೧೨ ಪ್ರಬಂಧಗಳ ಸಂಗ್ರಹ. ಈ ಮಾಲಿಕೆಯ ಕೆಳಗೆ, 'ಸಮದರ್ಶನ'ವೇ ಮುಂತಾದ ಇನ್ನೈದು ಪ್ರಬಂಧ ಸಂಕಲನಗಳು ಪ್ರಕಟವಾಗಿವೆ.

## ಸಾಹಿತ್ಯ ಮತ್ತು ಯುಗಧರ್ಮ

ಬೆಂಗಳೂರು, ಆನಂದ, ೧೯೫೨, ೧೬೦, ೨-೦೦

-ಸಾಹಿತ್ಯಿಕ ಪ್ರಬಂಧಗಳಲ್ಲದೇ, ಸರ್ವಜ್ಞ, ಉಮರಖಯ್ಯಾಂ ಮುಂತಾದವರ ವಿಮರ್ಶೆ ಈ ಸಂಕಲನದಲ್ಲಿದೆ.

## ಸಾಹಿತ್ಯ ಸಮಾರಾಧನೆ

ಮೈಸೂರು, ವಿದ್ಯಾನಿಧಿ, ೧೯೫೯, ೯೫, ೧-೨೫

-ಸಾಹಿತ್ಯ, ಸಂಸ್ಕೃತಿಗಳನ್ನು ಕುರಿತ ೭ ಪ್ರಬಧಗಳ ಸಂಚಯನ.

## ಹೊಸ ಹುಟ್ಟು

ಬೆಂಗಳೂರು, ವಿ. ಜಿ. ಟಿ., ೧೯೩೨, ೧೨೫, —

-ಧರ್ಮ, ರಾಜನೀತಿ, ಭಾಷೆ, ಚಿತ್ರಕಲೆ ಮೊದಲಾದ ವಿಷಯಗಳ ಮೇಲಿನ ೧೬ ಪ್ರಬಂಧಗಳಿವೆ. ಲೇಖಕರ ಪ್ರಥಮ ಪ್ರಬಂಧ ಸಂಕಲನ.

[ಪ್ರಬಂಧಗಳು: ೧೭]

# ೫ ಜೀವನ ಚರಿತ್ರೆಗಳು

## ಅಲ್ಲಮ ಪ್ರಭು

ಮೈಸೂರು, ವಿದ್ಯಾನಿಧಿ, ೧೯೫೯, ೧೦೨, ೧-೨೫

-ಅಲ್ಲಮ ಪ್ರಭುವಿನ ಜೀವನ ಮತ್ತು ಆಯ್ದ ವಚನಗಳನ್ನೊಳಗೊಂಡ ಚಿಕ್ಕ ಆಕಾರದ ಹೊತ್ತಗೆ.

## ಕನ್ನಡ ಕುಲರಸಿಕರು

ಬೆಂಗಳೂರು, ಆನಂದ, ೧೯೫೧, —, ೨-೫೦

-ಆಧುನಿಕ ಕನ್ನಡದ ೩೨ ಜನ ಸಾಹಿತ್ಯಿಕರ ರೇಖಾಚಿತ್ರಗಳ ಸಂಗ್ರಹ.

## ಕರ್ನಾಟಕದ ಕಲಾವಿದರು (೧೯೫೬)

ಬೆಂಗಳೂರು, ಆನಂದ, ೧೯೫೨, —, ೪-೯೪

-ಕನ್ನಡದ ಪ್ರಮುಖ ಚಿತ್ರಗಾರ, ಸಂಗೀತಗಾರ, ಶಿಲ್ಪಿ ಹಾಗೂ ನೃತ್ಯಕೋವಿದರು-ಈ ೧೬ ಕಲಾವಿದರ ಪರಿಚಯ ಗ್ರಂಥ.

## ಕೈಲಾಸಂ

ಶಿವಮೊಗ್ಗ, ಶಿವಮೊಗ್ಗ ಪ್ರೆಸ್, ೧೯೪೭, ೧೬೦, ೨-೨೫

-ಟಿ. ಪಿ. ಕೈ. ಅವರ ಜೀವನ, ಪ್ರತಿಭೆ, ವಿಚಾರಲಹರಿಗಳ ಮೆಚ್ಚಿಗೆ ಹಾಗೂ ವಿಮರ್ಶೆ.

## ದೀನಬಂಧು ಕಬೀರ್

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೮, ೧೨೯, ೧-೫೦

-ಮಹಾತ್ಮಾ ಕಬೀರರ ಜೀವನ ಹಾಗೂ ಸಂದೇಶ.

## ನನ್ನನ್ನು ನಾನೇ ಕಂಡೆ (೧೯೪೪)

ಮೈಸೂರು, ಡಿ. ವಿ. ಕೆ., ೧೯೬೦, ೮೯, ೧-೫೦

-ನನ್ನನ್ನೇ ಕುರಿತು ಆತ್ಮ ನಿರೀಕ್ಷಣೆಗೆ ಮಾಡಿಕೊಂಡ ಸಂದರ್ಶನ ರೂಪದ ಆತ್ಮಚರಿತ್ರೆ.

ಬಸವಣ್ಣನವರ ಅಮೃತ ವಾಣಿ (೧೯೪೩)

ಬೆಂಗಳೂರು, ವಿಶ್ವವಾಣಿ, ೧೯೫೯, ೧೪೬, ೨-೨೫

-ಬಸವಣ್ಣನವರ ಜೀವನ, ಸಂದೇಶ, ಹಾಗೂ ಕೆಲವು ವಚನಗಳ ನ್ನೊಳಗೊಂಡ ಗ್ರಂಥ.

ಭಾರತದ ಬಾಪೂ

ಬೆಂಗಳೂರು, ಎಸ್ಸೆಸ್ಸೆನ್, ೧೯೫೧, ೯೨, ೧-೨೫

-ಮಹಾತ್ಮಾ ಗಾಂಧಿಯವರ ಜೀವನ, ಅವರ ಸಾಧನೆಯ ಚಿತ್ರಣ ಈ ಗ್ರಂಥದಲ್ಲಿದೆ.

ವಿಶ್ವಬಂಧು ಶ್ರೀ ಬಸವೇಶ್ವರ

ಮೈಸೂರು, ವಿದ್ಯಾನಿಧಿ, ೧೯೫೯, ೮೧, ೧-೦೦

-ಬಸವಣ್ಣನವರ ಜೀವನದ ಕೆಲ ಮುಖಗಳ ವಿಶಿಷ್ಟ ಪರಿಚಯ ಗ್ರಂಥ.

ಶ್ರೀ ನಿಡುಮಾಮಿಡಿ ಸನ್ನಿಧಿಯವರು (೧೯೫೧)

ಬೆಂಗಳೂರು, ಪ್ರಬೋಧ, ೧೯೫೭, —, ೨-೦೦

-ಗೂಳೂರಿನ ನಿಡುಮಾಮಿಡಿ ಪೀಠದ ಜಗದ್ಗುರು ಶ್ರೀ ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರ ಜೀವನ ಮತ್ತು ಕೃತಿಗಳ ಪರಿಚಯ-ವಿಮರ್ಶೆ.

ಸ್ವಾಮಿ ವಿವೇಕಾನಂದ

ಬೆಂಗಳೂರು, ಎಸ್ಸೆಸ್ಸೆನ್, ೧೯೪೫, ೧೨೧, ೧-೨೫

-ಸ್ವಾಮಿ ವಿವೇಕಾನಂದರ ಜೀವನ ಚರಿತ್ರೆ ಹಾಗೂ ಬೋಧೆಯುಳ್ಳ ಗ್ರಂಥ.

[ಜೀವನ ಚರಿತ್ರೆಗಳು: ೧೧]

## ೬ ಸಂಪಾದಿತ ಗ್ರಂಥಗಳು

### ಕಾಮನ ಬಿಲ್ಲು ಭಾಗ ೧

ಧಾರವಾಡ, ಕ. ಸಾ. ಮ., ೧೯೩೩, ೩೫೦, ೧-೭೫

-ಕನ್ನಡದ ಪ್ರಾತಿನಿಧಿಕವಾದ ೨೪ ಕಥೆಗಳ ಸಂಕಲನ. ಕನ್ನಡ ಮತ್ತು ಸಣ್ಣ ಕತೆಯನ್ನು ಕುರಿತು ದೀರ್ಘವಾದ ಮುನ್ನುಡಿ ಇದೆ.

### ಕಾಮನಬಿಲ್ಲು ಭಾಗ ೨

ಧಾರವಾಡ, ಕ. ಸಾ. ಮ., ೧೯೪೫, ೧೬೨, ೨-೨೫

-ಭಾರತೀಯ ಭಾಷೆಗಳಲ್ಲಿಯ ಪ್ರಸಿದ್ಧ ಕತೆಗಳ ಸಂಗ್ರಹ, ಹಾಗೂ ಆ ಭಾಷೆಗಳ ಸಾಹಿತ್ಯ ಪರಿಚಯ.

### ಪ್ರಣಯ ಗೀತಗಳು (೧೯೩೦)

### ಪ್ರಗತಿಶೀಲ ಸಾಹಿತ್ಯ

ಬೆಂಗಳೂರು, ಪ್ರಗತಿಶೀಲ, ೧೯೪೪, ೨೧೨, ೨-೦೦

-ಸಾಹಿತ್ಯದ ವಿವಿಧ ಅಂಶಗಳನ್ನು ಕುರಿತ ೨೬ ಪ್ರಬಂಧಗಳಲ್ಲಿ, ಅ. ನ. ಕೃ. ಬರೆದವುಗಳು ನಾಲ್ಕು. ಇತರ ಲೇಖಕರ ಸಂಕ್ಷಿಪ್ತ ಪರಿಚಯವೂ ಇದೆ.

### ಭಗವದ್ಗೀತಾರ್ಥ ಸಾರ

ಬೆಂಗಳೂರು, ಸ್ಟ್ಯಾಂಡರ್ಡ್, ೧೯೫೬, ೧೭೬, ೨-೦೦

-ಹಾಡಲಿಕ್ಕೆ ಅನುಕೂಲವಾಗುವಂತೆ, ಭಗವದ್ಗೀತೆಯ ತಿರುಳನ್ನು ಕನ್ನಡಿಸಿದವರು ಅ. ನ. ಕೃ.ರ ಮುತ್ತಾತ ಕೃಷ್ಣಯೋಗಿಗಳು. ಅವರ ಇತರ ಆಧ್ಯಾತ್ಮ ಕೀರ್ತನೆಗಳೂ, ಬೆಳಗುಂತ್ತ ಪಾಳೆಯಗಾರರ ಬಗ್ಗೆ ಒಂದು ಲೇಖನವೂ ಇವೆ. ದೀರ್ಘ ಮುನ್ನುಡಿಯೊಂದಿಗೆ ಸಂಪಾದಿತವಾದ ಗ್ರಂಥ.

## ಮರುಳು ಸಿದ್ಧ ಕಾವ್ಯ

ಬೆಂಗಳೂರು, ವಿಶ್ವವಾಣಿ, ೧೯೪೬, ೧೮೦, ೩-೦೦

-ಪಂಚಾಚಾರ್ಯರಲ್ಲಿ ಒಬ್ಬನಾದ ಮರುಳಸಿದ್ಧನನ್ನು ಕುರಿತು ದೇವಕವಿ ಬರೆದ ಹಳೆಗನ್ನಡ ಕಾವ್ಯದ ಪಠ್ಯ, ಹಾಗೂ ವಿವರವಾದ ಪೀಠಿಕೆಯೊಡನೆ ಸಂಪಾದಿತವಾದ ಗ್ರಂಥ.

## ಮ್ಯಾಕ್ಸಿಂ ಗಾರ್ಕಿ

ಬೆಂಗಳೂರು, ಪ್ರಗತಿಶೀಲ, ೧೯೪೪, ೩೭೬, ೫-೫೦

-ರಶಿಯನ್ ಸಾಹಿತಿ, ಗಾರ್ಕಿಯ ಜೀವನ. ಕೃತಿಗಳ ಮೇಲೆ ವಿವಿಧ ಲೇಖಕರು ಬರೆದ ಸ್ಮಾರಕ ಗ್ರಂಥ.

## ರಸಮುಷ್ಟಿ

ಬೆಂಗಳೂರು, ಪ್ರಗತಿಶೀಲ, —, ೧೪೨, ೧-೫೦

-'ಪ್ರಗತಿಶೀಲ ಕವಿತಾಸಂಗ್ರಹ' ಕವಿಗಳ ಅಲ್ಪ ಪರಿಚಯವೂ ಇದೆ. ಗ್ರಂಥದ ಸಂಪಾದನ ಕಾರ್ಯವಲ್ಲದೆ ಅ. ನ. ಕೃ. ಉಮರನ ರುಬಾಯಿಯಾತ್‌ದ ೫೧ ಪದ್ಯಗಳನ್ನು ಅನುವಾದಿಸಿದ್ದಾರೆ.

[ಸಂಪಾದಿತ ಗ್ರಂಥಗಳು: ೮]

# ಪತ್ರಿಕಾ ಸಂಪಾದಕತ್ವ

| | |
|---|---|
| ಕಥಾಂಜಲಿ | ೧೯೨೮ |
| ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆ | ೧೯೪೪-೪೫ |
| ವಿಶ್ವವಾಣಿ | ೧೯೩೯ |
| ಕನ್ನಡ ನುಡಿ | ೧೯೩೯ |

## ೭ ಅನುವಾದ ಗ್ರಂಥಗಳು

ನೀಲಲೋಚನೆ ಮತ್ತು ಇತರ ಕತೆಗಳು

ಮೈಸೂರು, ಪೀಪಲ್ಸ್, ೧೯೫೭, ೨೪೦, ೧-೫೦

-ಮ್ಯಾಕ್ಸಿಂ ಗಾರ್ಕಿಯ ಹಲವು ಕತೆಗಳ ಅನುವಾದ.

ರಸಿಕಾಗ್ರಣಿ

ಮೈಸೂರು, ಪೀಪಲ್ಸ್, ೧೯೫೯, —, ೧-೭೫

-ಮ್ಯಾಕ್ಸಿಂ ಗಾರ್ಕಿಯ ಹಲವು ಸಣ್ಣ ಕತೆಗಳು.

[ಅನುವಾದಿತ ಗ್ರಂಥಗಳು: ೨]

ಪರಿಶಿಷ್ಟ

## ಅ. ನ. ಕೃ. ಬಗ್ಗೆ ಕೆಲವು ಗ್ರಂಥಗಳು

ಅ. ನ. ಕೃ. —ತ. ರಾ. ಸುಬ್ಬರಾಯ

ಚಿತ್ರದುರ್ಗ, ಸಾಹಿತ್ಯಾಲಯ, ೧೯೪೭, ೨೧೦, —

-ಕೃಷ್ಣರಾಯರ ವ್ಯಕ್ತಿತ್ವ ಹಾಗೂ ಕೃತಿ ರಚನೆಗಳ ವಿಮರ್ಶೆ.

ಅ. ನ. ಕೃ. ವಿಭಾಗ —'ಸಾಹಿತ್ಯಾಂಕ'ದಲ್ಲಿ

-ಎಚ್. ಬಿ. ಕುಲಕರ್ಣಿಯವರಿಂದ ಸಂಪಾದಿತ ಸಾಹಿತ್ಯಾಂಕದಲ್ಲಿರುವ ೫ ಲೇಖನಗಳ ಸಂಗ್ರಹ.

ಸಂಧ್ಯಾರಾಗ ಪ್ರಶಸ್ತಿ

ಬೆಂಗಳೂರು, ಎಸ್ಸೆಸ್ಸೆನ್, ೧೯೪೨, ೯೨, ೦-೬೨

-ಸಾರ್ವತ್ರಿಕ ಪ್ರಶಸ್ತಿಯನ್ನು ಹೊಂದಿದ 'ಸಂಧ್ಯಾರಾಗ' ಕಾದಂಬರಿಯ ಬಗ್ಗೆ ೧೩ ಜನ ನಾಡಿನ ಸಾಹಿತ್ಯಿಕರಿಂದ ಬರೆಯಲಾದ ಲೇಖನಗಳ ಸಂಕಲನ.

